# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಆಗಸ್ಟ್ ೭, ೨೦೧೪ (ಶ್ರಾವಣ ೧೬, ಶಕ ವರ್ಷ ೧೯೩೬)<br>Bangalore, Thursday, August 7, 2014 (Shravana 16, Shaka Varsha 1936) | ಸಂಚಿಕೆ ೩೨<br>Issue 32 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಆಹಾರ ಸುರಕ್ಷತೆ ಮತ್ತು ಗುಣಮಟ್ಟ ಕಾಯ್ದೆ 2006ರ ಅನುಷ್ಠಾನಕ್ಕೆ ಆರೋಗ್ಯ ಇಲಾಖೆಯಲ್ಲಿ ಸೃಜಿಸಲಾದ ಹುದ್ದೆಗಳಿಗೆ ಕಾರ್ಯಕಾರಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಆಕುಕ 317 ಸಿಜಿಇ 2011, ದಿನಾಂಕ: 23.08.2012.
2. ಆಯುಕ್ತರು, ಆಹಾರ ಸುರಕ್ಷತೆ ಆಕುಕಸೇ, ಇವರ ಪತ್ರ ಸಂಖ್ಯೆ: ಸಾಅಸಂ/ಆಸುಗುಕಾ/01/2011–12, ದಿನಾಂಕ: 08.10.2012.
3. ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 38 ಸೇನಿಇ 96, ದಿನಾಂಕ: 01.08.1996.

**ಪ್ರಸ್ತಾವನೆ:**

ಆಹಾರ ಸುರಕ್ಷತೆ ಮತ್ತು ಗುಣಮಟ್ಟ ಕಾಯ್ದೆ 2006 ಮತ್ತು ಅದರ ಅಡಿ ರಚಿಸಿರುವ ಆಹಾರ ಸುರಕ್ಷತೆ ಮತ್ತು ಗುಣಮಟ್ಟ ನಿಯಮಗಳು 2011ನ್ನು, ರಾಜ್ಯದಲ್ಲಿ ಪರಿಪೂರ್ಣವಾಗಿ ಅನುಷ್ಠಾನಗೊಳಿಸಲು ಅವಶ್ಯವಿರುವ ಹುದ್ದೆಗಳನ್ನು ಮೇಲೆ ಓದಲಾದ ಕ್ರಮಸಂಖ್ಯೆ (1) ರ ಸರ್ಕಾರದ ಆದೇಶದಲ್ಲಿ ಹೊಸದಾಗಿ ಸೃಜಿಸಿ/ಪದನಾಮೀಕರಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ ಕ್ರ.ಸಂ (2) ರಲ್ಲಿ ದಿನಾಂಕ: 08.10.2012ರ ಪತ್ರದಲ್ಲಿ ಆಯುಕ್ತರು, ಈ ಹೊಸದಾಗಿ ಸೃಜಿಸಲಾದ/ಪದನಾಮೀಕರಿಸಿದ ವಿವಿಧ ವೃಂದದ 415 ಹುದ್ದೆಗಳಿಗೆ ವೃಂದ ನೇಮಕಾತಿ ನಿಯಮ ರಚಿಸಬೇಕಾಗಿದ್ದು, ಸಮಗ್ರವಾದ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರಚಿಸಿ ಜಾರಿಗೊಳಿಸಲು ಕಾಲಾವಕಾಶ ಬೇಕಾಗುವುದರಿಂದ ಈ ಹುದ್ದೆಗಳಿಗೆ ಕಾರ್ಯಕಾರಿ ಆದೇಶ ಮೂಲಕ ನೇಮಕಾತಿ ವಿಧಾನವನ್ನು ನಿಗಧಿಪಡಿಸಿ ತುಂಬಲು ಆಯುಕ್ತರು, ಆಹಾರ ಸುರಕ್ಷತೆ ಮತ್ತು ಆಯುಕ್ತರು, ಆರೋಗ್ಯ ಕುಟುಂಬ ಕಲ್ಯಾಣ ಸೇವೆಗಳು, ಇವರು ಪ್ರಸ್ತಾಪಿಸಿರುತ್ತಾರೆ.

ಆಹಾರ ಸುರಕ್ಷತೆ ಮತ್ತು ಗುಣಮಟ್ಟ ಕಾಯ್ದೆಯ ಅನುಷ್ಠಾನಕ್ಕಾಗಿ ಸೃಜಿಸಲಾದ ಹುದ್ದೆಗಳಿಗೆ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಹೊಸದಾಗಿ ರಚಿಸುವ ಮೂಲಕ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅಳವಡಿಸಿ ತುಂಬಲು ಕಾಲಾವಕಾಶ ಬೇಕಾಗುವುದರಿಂದ, ಈ ಹುದ್ದೆಗಳನ್ನು ಕಾರ್ಯಕಾರಿ ಆದೇಶದ ಮೂಲಕ ನೇಮಕಾತಿ ವಿಧಾನವನ್ನು ನಿಗಧಿಪಡಿಸಿ ತುಂಬಲು ಅವಕಾಶ ಕಲ್ಪಿಸಲು ಉದ್ದೇಶಿಸಿದೆ. ಈ ಹಿನ್ನೆಲೆಯಲ್ಲಿ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಹೊಸದಾಗಿ ರಚಿಸಿ ಜಾರಿಗೆ ತರುವುದನ್ನು ಕಾಯ್ದಿರಿಸಿ ಮೇಲೆ ಓದಲಾದ (3)ರ ಅಧಿಕೃತ ಜ್ಞಾಪನದಲ್ಲಿನ ಮಾರ್ಗಸೂಚಿಗಳನ್ನು ಅಳವಡಿಸಿಕೊಂಡು ಕಾರ್ಯಕಾರಿ ಆದೇಶ ಹೊರಡಿಸುವ ಮೂಲಕ ಮೇಲ್ಕಂಡ ಹುದ್ದೆಗಳಿಗೆ ನೇಮಕಾತಿ ವಿಧಾನವನ್ನು ಜಾರಿಗೆ ತರಲು ನಿರ್ಧರಿಸಲಾಗಿದೆ.

ಆಹಾರ ಸುರಕ್ಷತೆ ಮತ್ತು ಗುಣಮಟ್ಟ ಕಾಯ್ದೆಯನ್ನು ರಾಜ್ಯದಲ್ಲಿ ಯಶಸ್ವಿಯಾಗಿ ಅನುಷ್ಠಾನಗೊಳಿಸಲು ಸಿಬ್ಬಂದಿಗಳ ಕೊರತೆ ಇರುವುದರಿಂದ ಆಹಾರ ಸುರಕ್ಷತೆ ನಿಯಮದಡಿ ಸೃಜಿಸಲಾದ ಹುದ್ದೆಗಳ ನೇಮಕಾತಿಗಳನ್ನು ಶೀಘ್ರವಾಗಿ ಮಾಡಲು ನೇಮಕಾತಿ ನಿಯಮಗಳ ರಚಿಸಲು ಮಾನ್ಯ ಮುಖ್ಯಮಂತ್ರಿಗಳ ಅನುಮೋದನೆ ಪಡೆಯಲಾಗಿದೆ.

ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 332 ಸಿಜಿಇ 2012, ಬೆಂಗಳೂರು, ದಿನಾಂಕ: 20.03.2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆಹಾರ ಸುರಕ್ಷತೆ ಮತ್ತು ಗುಣಮಟ್ಟ ಕಾಯ್ದೆ 2006ರ ಅನುಷ್ಠಾನಕ್ಕೆ ಆರೋಗ್ಯ ಇಲಾಖೆಯಲ್ಲಿ ಸೃಜಿಸಲಾದ ಹುದ್ದೆಗಳಿಗೆ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಬಾಕಿಇಟ್ಟು ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಆದೇಶದ ಅನುಬಂಧದಲ್ಲಿ ನಮೂದಿಸಿರುವಂತೆ ನೇಮಕಾತಿ ಕಾರ್ಯ ವಿಧಾನವನ್ನು ನಿಗಧಿಪಡಿಸಲಾಗಿದೆ.

1. ಈ ಕಾರ್ಯಕಾರಿ ಆದೇಶದ ಮೂಲಕ ನಿಗಧಿಪಡಿಸಿದ ನೇಮಕಾತಿ ವಿಧಾನವು ಸದರಿ ಕಾರ್ಯಕಾರಿ ಆದೇಶವನ್ನು ಹೊರಡಿಸಿದ ದಿನಾಂಕದಿಂದ ಆರು ತಿಂಗಳ ಕಾಲ ಮಾತ್ರ ಜಾರಿಯಲ್ಲಿರುತ್ತದೆ.
2. ಆರು ತಿಂಗಳ ಒಳಗಾಗಿ ಈ ನೇಮಕಾತಿ ಕಾರ್ಯವಿಧಾನವನ್ನು ವೃಂದ ಮತ್ತು ನೇಮಕಾತಿ ನಿಯಮಗಳನ್ನು ರಚಿಸಿ ಅಳವಡಿಸತಕ್ಕದ್ದು.
3. ಆರು ತಿಂಗಳ ನಂತರ ಈ ಕಾರ್ಯಕಾರಿ ಆದೇಶವು ತನ್ನಿಂದ ತಾನೇ ರದ್ದಾಗುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ಆರೋಗ್ಯ 1 & 2)

**ANNEXURE**

| Sl. No. | Category of Posts | No. of Posts | Pay Scale | Method of Recruitment | Minimum Qualification |
|---|---|---|---|---|---|
| 1 | 2 | 3 | 4 | 5 | 6 |
| 1 | Commissioner of Food Safety | 01 | | Commissioner of Health and Family Welfare Services and Ex-officio Commissioner of Food Safety | |
| 2 | Joint Food Safety Commissiner | 01 | 48900-63600 | By deputation of a Senior Scale KAS officer | |
| 3 | Joint Director (FSSA) | 01 | 40050-56550 | Promotion from the Cadre of Deputy Director, HFW Services or Deputation from joint Director, HFW Services | |
| 4 | Deputy Director (Admin) | 01 | 36300-56850 | Promotion from the Cadre of Designated Officer or Deputation from the Cadre of Deputy Director, HFW Services | Must have put in service not less than 3 years in the cadre of Designated officer. |
| 5 | Deputy Director (Squad) | 01 | 36300-56850 | Promotion from the Cadre of Designated officer or Deputation from the Cadre of Deputy Director, HFW Services | Must have put in service not less than 3 years in the cadre of Designated officer |
| 6 | Legal Advisor | 01 | 25000 (Consolidated) | By outsourcing | Must have possess Bachelor's Degree in LLB from recognised university established by law in India and must have 10 years experience has Legal Practitioner. |
| 7 | Disignated Officer | 36 | 28100-50100 | By 50% Direct recruitment & 50% Promotion from the cadre of Senior Food Safety Officers. | For direct recruitment, must have possess bachelor Degree in science with chemistry as one of the subjects or at least one of the educational qualifications prescribed for the Food Safety Officer under these Rules. |
| 8 | Junior Food Analyst | 25 | 22800-43200 | By Direct Recruitment | Must be holder of a Master's Degree in Chemistry or Biochemistry or Microbiology or Dairy chemistry or Food Technology Food and Nutrition. |
| 9 | Junior Microbiologist | 01 | 25000 Consolidated | By Direct Recruitment | Must have Master Degree in Food Microbiology |
| 10 | Senior food Safety Officer | 34 | 22800-43200 | By promotion from the cadre of Senior Food Safety Officer Grade-II If, no persons are available in this cadre, by giving promotion from the cadre of food safety officers. | Must have put in a service of not less than three years in the cadre of Food Safety Officers/Senior Food Safety Officers Grade-II |
| 11 | Senior food Safety Officer Grade II | | 21600-40500 | By shifting of existing 33 Senior Health Assistant/Food Inspector notified as Food Safety Officers and these posts are re-designated as Senior Food Safety Officers Grade-II | |

| Sl. No. | Category of Posts | No. of Posts | Pay Scale | Method of Recruitment | Minimum Qualification |
|---|---|---|---|---|---|
| 1 | 2 | 3 | 4 | 5 | 6 |
| 12 | Food safety Officer | 157 | 20000-36300 | 50% By Direct Recruitment:<br>50% By promotion from the cadre of Junior Food Safety Officer Grade-II If no persons are eligible for promotion from the cadre of Food Safery Officer Grade-II, these posts may be filled through Direct Recruitment | 1. Must be a holder of a degree in Food Technology or Biotechnology or Oil Technology or Agricultural Science, or Veterinary or Bio-Chemistry or Microbiology or Master Degree in Chemistry as one of the Subject. Degree in Medicine from recognised University or possess equivalent qualification.<br>2. Must have put in a service of not less than 3 years in the cadre of Junior Food Safety Officer Grade-II |
| 13 | Junior Food safety Officer Grade –II | | 17650-32000 | By Shifting of existing 50 Junior Health Assistant/Food Inspector notified as Food Safety Officers and these posts are re-designated as Junior Food Safety Officers Grade-II | |

ಪಿ. ನಾರಾಯಣ

PR. 542 ಸರ್ಕಾರದ ಅಧೀನ ಕಾರ್ಯದರ್ಶಿ

SC.250 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ಆರೋಗ್ಯ 1& 2)

**COMMERCE & INDUSTRIES SECRETARIAT**

**Sub**: Approval to the proposal of M/s Hindustan Aeronautics Ltd. to establish a unit for **"Manufacture, Repair** and **Overhaul of Helicopters**" at Bidarehallakaval, Marashettihalli Panchayath, Nittur Hobli, Gubbi Taluk, Tumkur District.

**Read**: Proceedings of the 34th State High Level Clearance Committee (SHLCC) meeting held on 04.03.2014.

**Preamble:**

M/s Hindustan Aeronautics Ltd. has proposed to establish a unit for "**Manufacture, Repair and Overhaul of Helicopters**", with an investment of Rs. 4990.00 crore, generating employment to about 3000 persons at Bidarehallakaval, Marashettihalli Panchayath, Nittur Hobli, Gubbi Taluk, Tumkur District.

The proposal was examined in the 34th State High Level Clearance Committee (SHLCC) Meeting held on 04.03.2014. Government has examined the recommendations made by the State High Level Clearance Committee, in all aspects.

Hence the following order.

**GOVERNMENT ORDER No. CI 92 SPI 2014, BANGALORE, DATED : 07.05.2014**

Government is pleased to accord in principle approval to the investment proposal of M/s Hindustan Aeronautics Ltd. to establish a unit for **"Manufacture, Repair and Overhaul of Helicopters**", with an investment of Rs. 4990.00 crore at Bidarehallakaval, Marashettihalli Panchayath, Nittur Hobli, Gubbi Taluk, Tumkur District, generating employment to about 3000 persons with the following infrastructure assistances, incentives and concessions:

| | |
|---|---|
| **Land :** | 600 acres of Government land to be allotted by Revenue Department at a cost to be decided by Government at Sy. No. 1, Bidarehallakaval, Marashettihalli Panchayath, Nittur Hobli, Gubbi Taluk, Tumkur District. |
| **Power :** | 10000 KVA for the plant and 2000 KVA for the Township to be serviced by BESCOM.<br>HAL has to install 15 MVA substation inside the proposed land to meet the power requirements at its own cost. |
| **Water :** | **Quantity**: 12,000 KL per month for the plant and 30 Lakh LPD for the Township.<br>**Source**: Hemavathi Canal. The promoter to file a separate application before WRD for allocation of water. |
| **Incentives & Concessions :** | As per Karnataka Aerospace Policy (2013-23). |

**Sanction of the above infrastructure facilities, incentives and concessions is subject to the following terms and conditions:**

1. **Environment:** The company to obtain Consent for Establishment and Consent for Operation from KSPCB and environmental clearance from MoEF, Govt. of India or the Dept of Forest, Ecology & Environment, Govt. of Karnataka, if applicable.

2. **Employment:** The Company shall comply with the provisions of Industrial Policy of Govt. of Karnataka and Dr. Sarojini Mahishi Report. Prepare a plan for development of Human Resources required for the project, train local people. A copy of Human Resources Development plan shall be sent to the Commissioner for Industrial Development & Director of Industries and Commerce for monitoring.
3. **Vendor Development:** Wherever there is scope for vendor development for the project, the company shall prepare a vendor development plan, develop local vendors and procure the required inputs, components and sub-assemblies from these local vendor units. A copy of the vendor development plan shall be sent to the Commissioner for Industrial Development & Director of Industries and Commerce for monitoring.
4. **Social Infrastructure Development:** The Company is advised to take up social infrastructure development projects in the vicinity of the proposed location of the unit and comply with the stipulation of Company Act 2013. A copy of such projects shall be sent to the Commissioner for Industrial Development & Director of Industries and Commerce for monitoring.
5. **Others:**
   a) The company shall adopt rainwater harvesting, waste water recycling and water conservation techniques. Zero discharge facility should be adopted wherever applicable.
   b) The company shall take all statutory and other necessary clearances from the competent authorities including Govt. of India and shall submit milestones/progress in the implementation of the project regularly, which will be monitored by the Department.

This approval is valid for a period of **two years** from the date of issue of this Government Order.

By Order and in the name of the Governor of Karnataka,

**S. UMADEVI**

Desk Officer (Technical Cell),

Commerce & Industries Department.

**PR. 504**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಗೌರೀಶ್ ಎಂ ಕಡವಡಕರ, ಪಿಸಿ–923, 6ನೇ ಪಡೆ, ಕೆಎಸ್ಆರ್‌ಪಿ, ಗುಲ್ಬರ್ಗಾ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಕಮಾಂಡೆಂಟ್, 6ನೇ ಪಡೆ, ಕೆಎಸ್ಆರ್‌ಪಿ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಸಿಬ್ಬಂದಿ(1)/ಇವಿ/ಪಿಸಿ–923/2012–13 ದಿನಾಂಕ 02.04.2013
2) ಮೇಲ್ಮನವಿ ಪ್ರಾಧಿಕಾರ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್ಆರ್‌ಪಿ, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು/03/2013–14 ದಿನಾಂಕ 15.10.2013
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 06.01.2014
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)83/2013–14 ದಿನಾಂಕ 19.04.2014

**ಪ್ರಸ್ತಾವನೆ:**

ಶ್ರೀ ಗೌರೀಶ್ ಎಂ ಕಡವಡಕರ, ಪಿಸಿ–923, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು 6ನೇ ಪಡೆ, ಕೆಎಸ್ಆರ್‌ಪಿ, ಗುಲ್ಬರ್ಗಾ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ನಿಷ್ಕಾಳಜಿ, ನಿರ್ಲಕ್ಷ್ಯತನ ಹಾಗೂ ಬೇಜವಾಬ್ದಾರಿ ತೋರಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

1) ಶ್ರೀ ಗೌರೀಶ ಎಂ ಕಡವಡಕರ, ಪಿ.ಸಿ ನಂ. 923. "ಎಫ್" ದಳ 6ನೇ ಪಡೆ ಕೆ.ಎಸ್.ಆರ್.ಪಿ ತಾಜಸುಲ್ತಾನಪೂರ, ಗುಲ್ಬರ್ಗಾ ಆದ ನೀವು ದಿನಾಂಕ: 04.11.2011 ರಿಂದ ದಿನಾಂಕ: 31.01.2012ರವರೆಗೆ 89 ದಿವಸ ಯಾವುದೇ ತರಹದ ರಜೆ ಹಾಗೂ ಯಾವುದೇ ಮೇಲಾಧಿಕಾರಿಯವರ ಪೂರ್ವಾನುಮತಿ ಪಡೆಯದೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುತ್ತೀರಿ. ಮತ್ತು ದಿನಾಂಕ: 30.03.2012 ರಿಂದ ದಿನಾಂಕ: 05.04.2012ರವರೆಗೆ 7 ದಿವಸ ಕಿರುಕುಳ ರಜೆ ಪಡೆದುಕೊಂಡು ಹೋಗಿ ದಿನಾಂಕ: 06.04.2012 ರಿಂದ 14.08.2012ರವರೆಗೆ 131 ದಿವಸ ರಜೆ ಮೀರಿ ನಿಂತು ಕರ್ತವ್ಯಕ್ಕೆ ಗೈರು ಹಾಜರಾಗಿರುವ ನೀವು ಕರ್ತವ್ಯದಲ್ಲಿ ನಿಷ್ಕಾಳಜಿ ಮತ್ತು ನಿರ್ಲಕ್ಷತನ ತೋರಿಸಿ, ಆಡಳಿತದಲ್ಲಿ ಆಡಚಣೆಯನ್ನುಂಟು ಮಾಡಿ, ಬೇಜವಾಬ್ದಾರಿಯಿಂದ ನಡೆದುಕೊಂಡು ಅತೀ ಘೋರವಾದ ಅಪರಾಧ ಎಸಗಿರುವಿರಿ.

2) ಶಿಸ್ತಿನ ಪೊಲೀಸ್ ಇಲಾಖೆಯಲ್ಲಿ ಒಬ್ಬ ಜವಾಬ್ದಾರಿಯುತ ಪೊಲೀಸ್ ಕಾನ್ಸ್‌ಟೇಬಲ್ ಅಂತಾ ಕಾರ್ಯ ನಿರ್ವಹಿಸುತ್ತಿರುವ ನೀವು ಇಲಾಖೆಯ ನಿಯಮಗಳನ್ನು ಬಲ್ಲವರಾಗಿದ್ದು, ಇಲಾಖೆಯ ನಿಯಮಗಳನ್ನು ಉಲ್ಲಂಘನೆ ಮಾಡಿ, ನೀವು ಅತೀ ಅವಶ್ಯಕ ಸಮಯದಲ್ಲಿ ನಿಮ್ಮ ಜವಾಬ್ದಾರಿಯನ್ನು ಮರೆತು 89 ದಿವಸ ಕರ್ತವ್ಯಕ್ಕೆ ಅವಧಿಕೃತ ಗೈರು ಹಾಜರಾಗಿರುತ್ತೀರಿ. ಮತ್ತು 131 ದಿವಸ ರಜೆ ಮೀರಿ ನಿಂತು ಕರ್ತವ್ಯಕ್ಕೆ ಸಂಪೂರ್ಣ ನಿಷ್ಠೆಯನ್ನು ತೋರದೆ ದುರ್ವರ್ತನೆಯನ್ನು ಪ್ರದರ್ಶಿಸಿ, ಸರ್ಕಾರಿ ಸೇವೆಯನ್ನು ಲಘುವಾಗಿ ಪರಿಗಣಿಸಿ ಬೇಜವಾಬ್ದಾರಿಯಿಂದ ನಡೆದುಕೊಂಡು ಅಕ್ಷಮ್ಯ ಅಪರಾಧ ಎಸಗಿರುವಿರಿ.

ಇಲಾಖಾ ವಿಚಾರಣೆಯಲ್ಲಿ ಆ.ಪೊ.ಅ.ರವರ ಮೇಲಿನ ಆಪಾದನೆಗಳು ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯ ನೀಡಿದ್ದು, ಅದರಂತೆ ಆ.ಪೊ.ಅ.ರವರಿಗೆ ಕಾರಣ ಕೇಳುವ ನೋಟೀಸ್ ಜಾರಿ ಮಾಡಿ, ಆ.ಪೊ.ಅ.ರವರು ನೀಡಿದ ಸಮಜಾಯಿಷಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಕಮಾಂಡೆಂಟ್, 6ನೇ ಪಡೆ, ಕೆಎಸ್‌ಆರ್‌ಪಿ, ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 02.04.2013ರ ಆದೇಶದಲ್ಲಿ ಅರ್ಜಿದಾರರನ್ನು ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಕಲಂ 23ರ ಉಪ ಕಲಂ (1)ರ ಖಂಡ (ಬಿ)ಯ ಉಪ ಖಂಡ (4)ರ ಪ್ರಕಾರ ತಕ್ಷಣದಿಂದ ಜಾರಿಗೆ ಬರುವಂತೆ ವಜಾ ಮಾಡಲಾಗಿದೆ ಹಾಗೂ ದಿನಾಂಕ 04.11.2011ರಿಂದ ದಿನಾಂಕ 31.01.2012ರವರೆಗೆ 89 ದಿವಸ ಮತ್ತು 30.03.2012ರಿಂದ 14.08.2012ರವರೆಗೆ 138 ದಿವಸ ಅನಧಿಕೃತ ಗೈರು ಹಾಜರಾದ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 106(ಎ) ಪ್ರಕಾರ ಸಂಬಳ ರಹಿತ ರಜೆಯನ್ನಾಗಿ ಸಕ್ರಮಗೊಳಿಸಿ ದಂಡನೆಯನ್ನು ವಿಧಿಸಿರುತ್ತಾರೆ.

ಶಿಸ್ತು ಪ್ರಾಧಿಕಾರದ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್‌ಆರ್‌ಪಿ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 15.10.2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿಯವರು ದಿನಾಂಕ 30.06.2001ರಂದು ಪೊಲೀಸ್ ಸೇವೆಗೆ ಸೇರಿದ್ದು, ಸೇವಾ ಅವಧಿಯಲ್ಲಿ ಒಟ್ಟು 29 ಬಾರಿ ಅನಧಿಕೃತವಾಗಿ ಗೈರು ಹಾಜರಾಗಿರುವುದು ಮತ್ತು ಸುಮಾರು 10 ಬಾರಿ ನಿಯಮ 7ರಡಿ ಶಿಕ್ಷೆಗೆ ಗುರಿಯಾಗಿದ್ದು ಸರ್ಕಾರಿ ನೌಕರಿಗೆ ಯೋಗ್ಯರಲ್ಲವೆಂಬುದನ್ನು ಸಾಬೀತು ಪಡಿಸುತ್ತದೆ. ಈ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 11 ಪೊಸಿಅ 2014 ಬೆಂಗಳೂರು, ದಿನಾಂಕ: 06.06.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಗೌರೀಶ್ ಎಂ ಕಡವಡಕರ, ಪಿಸಿ–923, 6ನೇ ಪಡೆ, ಕೆಎಸ್‌ಆರ್‌ಪಿ, ಗುಲ್ಬರ್ಗಾ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವೆಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

**PR. 514** ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಬಿ)

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಟಿ.ಐ. ದಾವಲಸಾಬನವರ, ಸಿಪಿಸಿ–2087, ಉಪ ನಗರ ಪೊಲೀಸ್ ಠಾಣೆ, ಹುಬ್ಬಳ್ಳಿ ಧಾರವಾಡ ನಗರ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಹುಬ್ಬಳ್ಳಿ ಧಾರವಾಡ ನಗರ ಇವರ ಆದೇಶ ಸಂಖ್ಯೆ: ಸಿಬ್ಬಂದಿ–3/ನಿಯಮ–6/06/2010 (ಆದೇಶ ಪುಸ್ತಕ ಸಂಖ್ಯೆ: 755/2012) ದಿನಾಂಕ 31.07.2012

2) ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು(4)/49/2012–13 (ಓ.ಬಿ.ಸಂಖ್ಯೆ: 27/2013–14) ದಿನಾಂಕ 27.08.2013

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 15.11.2013

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)73/2013–14 ದಿನಾಂಕ 04.03.2014

**ಪ್ರಸ್ತಾವನೆ:**

ಶ್ರೀ ಟಿ.ಐ. ದಾವಲಸಾಬನವರ, ಸಿಪಿಸಿ–2087, ಉಪ ನಗರ ಪೊಲೀಸ್ ಠಾಣೆ, ಹುಬ್ಬಳ್ಳಿ ಧಾರವಾಡ ನಗರ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ವಿದ್ಯಾಗಿರಿ ಪೊಲೀಸ್ ಠಾಣೆ, ಧಾರವಾಡ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ನಿರ್ಲಕ್ಷ್ಯತನ ಹಾಗೂ ಪರಸ್ತ್ರೀಯೊಂದಿಗೆ ಅನೈತಿಕ ಚಟುವಟಿಕೆಗಳಲ್ಲಿ ಭಾಗಿಯಾದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

1) ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳಕ್ಕೆ ನಿಯೋಜನೆ ಬಯಸಿ ನೀವು ದಿನಾಂಕ 07.11.2008ರ ವರ್ಗಾವಣೆ ಮನವಿಯನ್ನು ಸಮುಚಿತ ಮಾರ್ಗದಲ್ಲಿ ಸಲ್ಲಿಸದೇ ನೇರವಾಗಿ ಸದರಿ ಘಟಕದ ಪೊಲೀಸ್ ಮಹಾ ನಿರೀಕ್ಷಕರಿಗೆ ಸಲ್ಲಿಸಿ ಸರ್ಕಾರದ/ಇಲಾಖೆಯ ನಿಯಮಗಳನ್ನು ಉಲ್ಲಂಘಿಸಿರುವಿರಿ.

2) ದಿನಾಂಕ 27.12.2009ರಂದು ಮೋಹರಂ ಹಬ್ಬದ ಬಂದೋಬಸ್ತ್ ನಿಮಿತ್ತ ನಿಮ್ಮನ್ನು ನವಲೂರ ಗ್ರಾಮಕ್ಕೆ ಕರ್ತವ್ಯಕ್ಕೆ ನಿಯೋಜಿಸಿದಾಗ ಪಿ.ಐ., ವಿದ್ಯಾಗಿರಿ ಪೊಲೀಸ್ ಠಾಣೆ, ಧಾರವಾಡ ಇವರು ನಿಮ್ಮನ್ನು ಅಂದು 22–30 ಗಂಟೆಗೆ ನವಲೂರ ಗ್ರಾಮದಲ್ಲಿ ಚೆಕ್ ಮಾಡಲಾಗಿ ನೀವು ನಿಮ್ಮ ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾಗಿರುವಿರಿ.

3) ವಿದ್ಯಾಗಿರಿ ಪೊಲೀಸ್ ಠಾಣೆ, ಅಪರಾಧ ಕ್ರಮಾಂಕ 38/1998 ಕಲಂ 454, 457, 380 ಐ.ಪಿ.ಸಿ.ನೇದ್ದರಲ್ಲಿಯ ಆರೋಪಿ ಇಸ್ಮಾಯಿಲ್ @ ಗಿಡ್ಡು ಉಸ್ಮಾನ ತಂದೆ ಖಾಸಿಮಸಾಬ ಬಾಗವಾನ, ಸಾ॥ ಗ್ಯಾಂಗವಾಡಿ, ಬೆಳಗಾವಿ, ಈತನಿಗೆ ಹಾಗೂ ಪ್ರಕಾಶ

ದುರ್ಗಪ್ಪ ಮುರಗೋಡ, ಎಂ.ಓ.ಬಿ. ಸಾ॥ ರಾಮದುರ್ಗ, ಗಾಂಧಿನಗರ, ಇವರನ್ನು ಹಾಜರು ಪಡಿಸಲು ದಿನಾಂಕ 08.01.2010ರಂದು ಪಿ.ಎಸ್.ಐ. (ಕಾ ವ ಸು) ವಿದ್ಯಾಗಿರಿ ಪೊಲೀಸ್ ಠಾಣೆ, ಧಾರವಾಡ ಇವರು ನಿಯೋಜಿಸಿದ್ದರೂ ಸಹಾ ನೀವು ಈ ಬಗ್ಗೆ ಸಕಾರಾತ್ಮಕ ಕ್ರಮ ಕೈಗೊಳ್ಳದೇ ಕರ್ತವ್ಯ ಲೋಪ ಎಸಗಿರುವಿರಿ.

4) ದಿನಾಂಕ 16.03.2009ರಿಂದ ದಿನಾಂಕ 20.04.2009ರವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರು ಉಳಿದು ಖಂಡನೀಯ ಕರ್ತವ್ಯ ನಿರ್ಲಕ್ಷ್ಯತೆ ಎಸಗಿರುವಿರಿ ಹಾಗೂ

5) ನಿಮ್ಮನ್ನು ಬೆಂಗಳೂರಿನಲ್ಲಿ ನಡೆಯಲಿದ್ದ ವಾರ್ಷಿಕ ಕ್ರೀಡಾ ಕೂಟಕ್ಕೆ, ಸಿ.ಎ.ಆರ್.ಗೆ ನಿಯೋಜಿಸಿದಾಗ ನೀವು ದಿನಾಂಕ 14.01.2010ರಂದು ನಿಮ್ಮ ತಂದೆಯವರನ್ನು ಆಸ್ಪತ್ರೆಗೆ ಹೋಗಿ ನೋಡಿಕೊಂಡು ಬರುತ್ತೇನೆ ಅಂತಾ ಹೋಗಿ ಪುನಃ ಅಂದು ಮರಳಿ ಸಿ.ಎ.ಆರ್. ಹುಬ್ಬಳ್ಳಿ-ಧಾರವಾಡಕ್ಕೆ ಬರದೇ ದಿನಾಂಕ 15.01.2010ರಂದು ವಾಪಸ್ ಬಂದಿರುವಿರಿ. ಹಾಗೂ

6) ನೀವು ದಿನಾಂಕ 14.01.2010ರಂದು ಸಿ.ಎ.ಆರ್. ಘಟಕದಿಂದ ಅನುಮತಿ ಪಡೆದುಕೊಂಡು ಬಂದ ನಂತರ ಅಂದು ಸಂಜೆ 19:00 ಗಂಟೆಗೆ ತಡಸಿನಕೊಪ್ಪ ಡಬಲ್ ರೋಡ್‌ದಲ್ಲಿ ಕೆಎ25 ಎಂಎ3786 ಎಂಬ ಮಾರ್ಟಿಜ್ ಕಾರಿನಲ್ಲಿ ಹಿಂದಿನ ಸೀಟಿನಲ್ಲಿ ಅನ್ಯ ಯುವತಿಯೊಂದಿಗೆ ಅನೈತಿಕ ಹಾಗೂ ಅಶ್ಲೀಲಕರ ಚಟುವಟಿಕೆಯಲ್ಲಿ ನಿರಂತರಾಗಿ ಶಿಸ್ತಿನ ಇಲಾಖೆಯಲ್ಲಿ ಇದ್ದುಕೊಂಡು ಮಹಿಳೆಯರ ರಕ್ಷಣೆಗೆ ಮುಂದಾಗಬೇಕಾದ ನೀವೇ ಇಂತಹ ಅನೈತಿಕ ಚಟುವಟಿಕೆಯಲ್ಲಿ ನಿರತರಾಗಿ ನೈತಿಕ ಅದಃಪತನ ತೋರಿಸಿ ಖಂಡನೀಯ ದುರ್ನಡತೆ ತೋರಿಸಿರುವಿರಿ.

ಇಲಾಖಾ ವಿಚಾರಣೆಯಲ್ಲಿ ಆಪೊಅ ರವರುಗಳ ಮೇಲಿನ ಆಪಾದನೆಗಳು ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯ ನೀಡಿದ್ದು, ಅದರಂತೆ ಆ.ಪೊ.ಅ.ರವರಿಗೆ ಕಾರಣ ಕೇಳುವ ನೋಟೀಸ್ ಜಾರಿ ಮಾಡಿ, ಆ.ಪೊ.ಅ.ರವರು ನೀಡಿದ ಸಮಜಾಯಿಷಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಹುಬ್ಬಳ್ಳಿ ಧಾರವಾಡ ನಗರ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 31.07.2012ರ ಆದೇಶದಲ್ಲಿ ಕೆಳಕಂಡಂತೆ ದಂಡನೆಯನ್ನು ವಿಧಿಸಿರುತ್ತಾರೆ.

1) ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರುವಂತೆ "ಐದು (05) ವರ್ಷಗಳ ಕಾಲ" ಮುಂದೂಡಲಾಗಿದೆ

2) ಇವರ ಅನಧಿಕೃತ ಗೈರು ಹಾಜರಿ ದಿನಾಂಕ 14.01.2010ರ ಅಪರಾಹ್ನದಿಂದ ದಿನಾಂಕ 15.01.2010ರಂದು ಕರ್ತವ್ಯಕ್ಕೆ ಹಾಜರಾಗುವವರೆಗೆ ಒಂದು (01) ದಿನ ಗೈರು ಹಾಜರ್ ಎಂದೇ ಪರಿಗಣಿಸಲಾಗಿದೆ.

3) ಇವರ ಅಮಾನತ್ತಿನ ಅವಧಿ ದಿನಾಂಕ 26.01.2010ರಿಂದ ದಿನಾಂಕ 27.07.2010ರವರೆಗೆ ಒಟ್ಟು 183 ದಿನಗಳನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ.

ಶಿಸ್ತು ಪ್ರಾಧಿಕಾರದ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 27.08.2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆಯು ದೋಷಾರೋಪಣೆಗೆ ಅನುಗುಣವಾಗಿರುವುದರಿಂದ ಹಾಗೂ ಪರಿಷ್ಕರಣ ಮೇಲ್ಮನವಿಯನ್ನು ಪರಿಷ್ಕರಿಸಲು ಯಾವುದೇ ಸಮರ್ಥ ಕಾರಣಗಳು ಇಲ್ಲದಿರುವ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 171 ಪೊಸಿಅ 2013 ಬೆಂಗಳೂರು, ದಿನಾಂಕ: 06.06.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಟಿ.ಐ. ದಾವಲಸಾಬನವರ, ಸಿಪಿಸಿ-2087, ಉಪ ನಗರ ಪೊಲೀಸ್ ಠಾಣೆ, ಹುಬ್ಬಳ್ಳಿ ಧಾರವಾಡ ನಗರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವೇಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

PR. 517 ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು-ಬಿ)

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಸ್.ಎಂ. ಬೆಂಕಿ, ಪಿಎಸ್ಐ, ಜೇವರ್ಗಿ ಪೊಲೀಸ್ ಠಾಣೆ, ಗದಗ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ: ಡಿಇ/62/ಉವ/2007-09 ದಿನಾಂಕ 21.03.2009

2) ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಹಿಂಬರಹ ಸಂಖ್ಯೆ: ಅಪೀಲು(4)/51/2012-13 ದಿನಾಂಕ 24.06.2013

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 11.12.2013

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)77/2013-14 ದಿನಾಂಕ 11.03.2014

**ಪ್ರಸ್ತಾವನೆ:**

ಶ್ರೀ ಎಸ್.ಎಂ. ಬೆಂಕಿ, ಪಿಎಸ್ಐ, ಜೇವರ್ಗಿ ಪೊಲೀಸ್ ಠಾಣೆ, ಗದಗ ಜಿಲ್ಲೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಗಜೇಂದ್ರಗಡ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಅತೀವ ಅಶಿಸ್ತು ಹಾಗೂ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ದ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

1) ನೀವು ಅಪಾದಿತ ಪೊಲೀಸ್ ಅಧಿಕಾರಿರವರಾದ ಶ್ರೀ ಸುದೀರ.ಎಮ್.ಬೆಂಕಿ, ಪಿಎಸ್ಐ ಗಜೇಂದ್ರಗಡ ಪೊಲೀಸ್ ಠಾಣೆ ಗದಗ ಜಿಲ್ಲೆ ಸಧ್ಯ ಪಿಎಸ್ಐ (ಕಾ ಮತ್ತು ಸು) ಬ್ಯಾಡಗಿ ಪೊಲೀಸ್ ಠಾಣೆ, ಹಾವೇರಿ ಜಿಲ್ಲೆ ಒಬ್ಬ ಜವಾಬ್ದಾರಿಯುತ ಪೊಲೀಸ್ ಸಬ್ಇನ್ಸ್‌ಪೆಕ್ಟರ್ ಹುದ್ದೆಯಲ್ಲಿ ಗಜೇಂದ್ರಗಡ ಪೊಲೀಸ್ ಠಾಣೆಯಾಧಿಕಾರಿಯಾಗಿ ದಿನಾಂಕ: 11.05.2006 ರಿಂದ 26.09.2006ರವರೆಗೆ ಗಜೇಂದ್ರಗಡ ಪೊಲೀಸ್ ಠಾಣೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾಗ, ದಿನಾಂಕ: 16.09.2006 ಶ್ರೀ ದಿಲಾವರ ಮಹ್ಮದಸಾಬ ಯಕ್ಕುಂಡಿ ಸಾ:ಹಿರೇಕೊಪ್ಪ ತಾ: ಸವದತ್ತಿ ರವರ ಅಂಬಾಸೆಡರ್ ಕಾರ ನಂ. ಕೆಎ–22 ಎಂ–1890 ಮತ್ತು ಶ್ರೀ ಬಸವರಾಜ ಸಂಗಪ್ಪ ಬಾದವಾಡಗಿ ಸಾ: ಸೂಡಿ ತಾ: ರೋಣ ಇವರ ಮಾರುತಿ–800 ಕಾರ ನಂ: ಎಂಎಚ್–09 ಇ–2299 ನೇದ್ದವುಗಳು ಗಜೇಂದ್ರಗಡ ಹತ್ತಿರ ಆಪಘಾತಕ್ಕೀಡಾದಾಗ ಕಾನೂನು ರೀತ್ಯ ನೀವು ಪ್ರಕರಣವನ್ನು ದಾಖಲಿಸಬೇಕಾಗಿತ್ತು. ಆದರೆ ಅಪಘಾತ ಪ್ರಕರಣ ದಾಖಲಿಸದೇ ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತನ ಮತ್ತು ಬೇಜವಾಬ್ದಾರಿತವನ್ನು ಪ್ರದರ್ಶಿಸಿರುತ್ತೀರಿ

2) ನೀವು ಅಪಾದಿತ ಪೊಲೀಸ್ ಅಧಿಕಾರಿರವರಾದ ಶ್ರೀ ಸುದೀರ.ಎಮ್.ಎಸ್. ಬೆಂಕಿ, ಪಿಎಸ್ಐ ಗಜೇಂದ್ರಗಡ ಪೊಲೀಸ್ ಠಾಣೆ, ಗದಗ ಜಿಲ್ಲೆ ಸಧ್ಯ ಪಿಎಸ್ಐ (ಕಾ ಮತ್ತು ಸು) ಬ್ಯಾಡಗಿ ಪೊಲೀಸ್ ಠಾಣೆ, ಹಾವೇರಿ ಜಿಲ್ಲೆ ಒಬ್ಬ ಜವಾಬ್ದಾರಿಯುತ ಪೊಲೀಸ್ ಸಬ್ಇನ್ಸ್‌ಪೆಕ್ಟರ್ ಹುದ್ದೆಯಲ್ಲಿ ಗಜೇಂದ್ರಗಡ ಪೊಲೀಸ್ ಠಾಣೆಯಾಧಿಕಾರಿಯಾಗಿ ದಿನಾಂಕ: 11.05.2006 ರಿಂದ 26.09.2006ರವರೆಗೆ ಗಜೇಂದ್ರಗಡ ಪೊಲೀಸ್ ಠಾಣೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾಗ, ದಿನಾಂಕ: 16.09.2006 ಶ್ರೀ ದಿಲಾವರ ಮಹ್ಮದಸಾಬ ಯಕ್ಕುಂಡಿ ಸಾ:ಹಿರೇಕೊಪ್ಪ ತಾ: ಸವದತ್ತಿ ರವರ ಅಂಬಾಸೆಡರ್ ಕಾರ ನಂ. ಕೆಎ–22 ಎಂ–1890 ಮತ್ತು ಶ್ರೀ ಬಸವರಾಜ ಸಂಗಪ್ಪ ಬಾದವಾಡಗಿ ಸಾ: ಸೂಡಿ ತಾ: ರೋಣ ಇವರ ಮಾರುತಿ–800 ಕಾರ ನಂ: ಎಂಎಚ್–09 ಇ–2299 ನೇದ್ದವುಗಳು ಗಜೇಂದ್ರಗಡ ಹತ್ತಿರ ಆಪಘಾತಕ್ಕೀಡಾದಾಗ ಅಪಘಾತಕ್ಕೀಡಾದ ಯಾವುದೇ ಪ್ರಕರಣ ದಾಖಲ ಇಲ್ಲದೆ ಕಾರಿನ ಮಾಲಿಕ ಶ್ರೀ ಬಸವರಾಜ ಸಂಗಪ್ಪ ಬಾದವಾಡಗಿ ಸಾ:ಸೂಡಿ ತಾ:ರೋಣ ಇವರನ್ನು ಹಾಗೂ ಅವರ ಮಾರುತಿ–800 ಕಾರನ್ನು ಮಾತ್ರ ಬಿಡುಗಡೆಗೊಳಿಸಿ ಅಪಘಾತ ಮಾಡಿದ ಶ್ರೀ ದಿಲಾವರ ಮಹ್ಮದಸಾಬ ಯಕ್ಕುಂಡಿ ಸಾ:ಹಿರೇಕೊಪ್ಪ ತಾ:ಸವದತ್ತಿರವನ್ನು ಹಾಗೂ ಅವರ ಅಂಬಾಸೆಡರ್ ಕಾರು ಮತ್ತು ಅದರಲ್ಲಿದ್ದ ಅವರ ಸ್ನೇಹಿತರಾದ 1. ಶ್ರೀ ಶಿವಾನಂದ ಬೂಪಣ್ಣ ಖಾರಿ ಸಾ: ಮೂರಗೋಡ 2. ಶ್ರೀ ರಾಮಚಂದ್ರ ಸಿದ್ದರಾಯಪ್ಪ ಶೆಟ್ಟರ ಸಾ: ಮುರಗೋಡ 3. ಶ್ರೀ ಆಸ್ಪಾಕ ಅಕಬರಸಾಬ ಮಿರ್ಜಾನವರ ಸಾ:ಬೈಲಹೊಂಗಲ್ ಹೀಗೆ ನಾಲ್ಕು ಜನರನ್ನು ಮತ್ತು ಅಂಬಾಸೆಡರ್ ಕಾರನ್ನು ದಿನಾಂಕ: 16.09.2006 ರಂದು ರಾತ್ರಿ 10 ಗಂಟೆಯಿಂದ ದಿನಾಂಕ: 17.09.2007ರ ಬೆಳಿಗ್ಗೆ 4 ಗಂಟೆ ವರೆಗೆ ಠಾಣೆಯಲ್ಲಿ ಅಕ್ರಮವಾಗಿ ತಂದಿಟ್ಟು ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನವನ್ನು ಪ್ರದರ್ಶಿಸಿರುತ್ತೀರಿ.

3) ನೀವು ಅಪಾದಿತ ಪೊಲೀಸ್ ಅಧಿಕಾರಿರವರಾದ ಶ್ರೀ ಸುದೀರ.ಎಮ್.ಎಸ್. ಬೆಂಕಿ, ಪಿಎಸ್ಐ ಗಜೇಂದ್ರಗಡ ಪೊಲೀಸ್ ಠಾಣೆ, ಗದಗ ಜಿಲ್ಲೆ ಸಧ್ಯ ಪಿಎಸ್ಐ (ಕಾ ಮತ್ತು ಸು) ಬ್ಯಾಡಗಿ ಪೊಲೀಸ್ ಠಾಣೆ, ಹಾವೇರಿ ಜಿಲ್ಲೆ ಒಬ್ಬ ಜವಾಬ್ದಾರಿಯುತ ಪೊಲೀಸ್ ಸಬ್ಇನ್ಸ್‌ಪೆಕ್ಟರ್ ಹುದ್ದೆಯಲ್ಲಿ ಗಜೇಂದ್ರಗಡ ಪೊಲೀಸ್ ಠಾಣೆಯಾಧಿಕಾರಿಯಾಗಿ ದಿನಾಂಕ: 11.05.2006 ರಿಂದ 26.09.2006ರವರೆಗೆ ಗಜೇಂದ್ರಗಡ ಪೊಲೀಸ್ ಠಾಣೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾಗ, ದಿನಾಂಕ: 16.09.2006 ಶ್ರೀ ದಿಲಾವರ ಮಹ್ಮದಸಾಬ ಯಕ್ಕುಂಡಿ ಸಾ:ಹಿರೇಕೊಪ್ಪ ತಾ: ಸವದತ್ತಿ ರವರ ಅಂಬಾಸೆಡರ್ ಕಾರ ನಂ. ಕೆಎ–22 ಎಂ–1890 ಮತ್ತು ಶ್ರೀ ಬಸವರಾಜ ಸಂಗಪ್ಪ ಬಾದವಾಡಗಿ ಸಾ: ಸೂಡಿ ತಾ: ರೋಣ ಇವರ ಮಾರುತಿ–800 ಕಾರ ನಂ: ಎಂಎಚ್–09 ಇ–2299 ನೇದ್ದವುಗಳು ಗಜೇಂದ್ರಗಡ ಹತ್ತಿರ ಆಪಘಾತಕ್ಕೀಡಾದಾಗ ಕಾಯ್ದೆಬಾಹಿರವಾಗಿ ರಾಜಿ ಮಾಡಿ ಇತ್ಯರ್ಥ ಗೊಳಿಸಲು ಅಪಘಾತಕ್ಕೀಡಾದ ಕಾರಿನ ಮಾಲಿಕ ಶ್ರೀ ಬಸವರಾಜ ಸಂಗಪ್ಪ ಬಾದವಾಡಗಿ ಸಾ:ಸೂಡಿ ತಾ:ರೋಣ ಇವರನ್ನು ಹಾಗೂ ಅವರ ಮಾರುತಿ–800 ಕಾರನ್ನು ಮಾತ್ರ ಬಿಡುಗಡೆಗೊಳಿಸಿ ಅಪಘಾತ ಮಾಡಿದ ಶ್ರೀ ದಿಲಾವರ ಮಹ್ಮದಸಾಬ ಯಕ್ಕುಂಡಿ ಸಾ: ಹಿರೇಕೊಪ್ಪ ತಾ:ಸವದತ್ತಿರವನ್ನು ಹಾಗೂ ಅವರ ಅಂಬಾಸೆಡರ್ ಕಾರು ಮತ್ತು ಅದರಲ್ಲಿದ್ದ ಅವರ ಸ್ನೇಹಿತರಾದ 1. ಶ್ರೀ ಶಿವಾನಂದ ಬೂಪಣ್ಣ ಖಾರಿ ಸಾ: ಮೂರಗೋಡ 2. ಶ್ರೀ ರಾಮಚಂದ್ರ ಸಿದ್ದರಾಯಪ್ಪ ಶೆಟ್ಟರ ಸಾ: ಮುರಗೋಡ 3. ಶ್ರೀ ಆಸ್ಪಾಕ ಅಕಬರಸಾಬ ಮಿರ್ಜಾನವರ ಸಾ:ಬೈಲಹೊಂಗಲ್ ಇವರನ್ನು ಬಿಡಲು 8000/– ರೂ.ಗಳ ಅಕ್ರಮ ಸಂಭಾವನೆಯನ್ನು ಬೇಡಿಕೆ ಇಟ್ಟು ಶ್ರೀ ದಿಲಾವರ ಮಹ್ಮದಸಾಬ ಯಕ್ಕುಂಡಿ ಹಾಗೂ ಅವರ ಸ್ನೇಹಿತರಿಂದ ರೂ.2000/– ಹಾಗೂ 3 ಮೊಬೈಲ್ ಫೋನುಗಳನ್ನು ಕಾಯ್ದೆಬಾಹಿರವಾಗಿ ತೆಗೆದುಕೊಂಡು ಸದರಿ ಮೊಬೈಲ್ ಫೋನುಗಳನ್ನು ವಾಪಸಕೊಡಲು ಇನ್ನೂ ರೂ.4000/– ಗಳನ್ನು ಕೊಡಲು ಒತ್ತಾಯಿಸಿದಾಗ ಅವರು ಅಷ್ಟು ಹಣವನ್ನು ಕೊಡಲಿಕ್ಕೆ ಆಗುವುದಿಲ್ಲ ಅಂತಾ ವಿನಂತಿಸಿಕೊಂಡಾಗ ನೀವು ಕೊನೆಯ ಪಕ್ಷ ರೂ.2000/– ಅಕ್ರಮ ಸಂಭಾವನೆಯನ್ನು ತಂದು ಕೊಡಲು ನಿಶ್ಚಯಿಸಿ ದಿನಾಂಕ:26.09.2006 ರಂದು ಸದರಿಯವರು ನಿಮಗೆ ರೂ.2000/– ಗಳನ್ನು ಕೊಟ್ಟು ಮೊಬೈಲ್ ಫೋನ್‌ಗಳನ್ನು ತೆಗೆದುಕೊಂಡು ಹೋಗಲು ನಿಮಗೆ ಠಾಣೆಗೆ ಬಂದು ಬೇಟ್ಟಿಯಾದಾಗ ನೀವು ನಿಮ್ಮ ಮಧ್ಯವರ್ತಿ ಶ್ರೀ ಸಿದ್ದರಾಮೇಶ್ವರ ಉರುಫ್ ಸಿದ್ದು ತಂದೆ ಚನ್ನಬಸಪ್ಪ ಚಿನಿವಾಲರ ರವರ ಮುಖಾಂತರ ಸದರಿ ಅಕ್ರಮ ಸಂಭಾವನೆಯ ರೂ. 2000/– ಗಳನ್ನು ಪಡೆದುಕೊಂಡಿದ್ದು, ಲೋಕಾಯುಕ್ತ ಪೊಲೀಸರು ಟ್ರ್ಯಾಪ್ ಮಾಡಿ ಗದಗ ಲೋಕಾಯುಕ್ತ ಪೊಲೀಸ್ ಠಾಣೆ ಅಪರಾಧ ಸಂಖ್ಯೆ: 10/2006 ಕಲಂ–7, 13 (1) (ಡಿ) ಸಹಕಲಂ 13 (2) ಪಿ.ಸಿ. ಆಕ್ಟ 1989 ನೇದ್ದರ ಕೆಳಗೆ ದಾಖಲಿಸಿದ್ದು ಇರುತ್ತದೆ. ನೀವು ರೂ. 2000/– ಗಳ ಅಕ್ರಮ ಸಂಭಾವನೆಯನ್ನು ಪಡೆದು ಆಪ್ರಾಮಾಣಿಕತೆಯನ್ನು ಪ್ರದರ್ಶಿಸಿ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತನ ಮತ್ತು ಕರ್ತವ್ಯಚ್ಯುತಿಯನ್ನೆಸಗಿ ಘೋರ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.

ಇಲಾಖಾ ವಿಚಾರಣೆಯಲ್ಲಿ ಆಪೊಅ ರವರುಗಳ ಮೇಲಿನ ಆಪಾದನೆಗಳು ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯ ನೀಡಿದ್ದು, ಅದರಂತೆ ಆ.ಪೊ.ಅ.ರವರಿಗೆ ಕಾರಣ ಕೇಳುವ ನೋಟೀಸ್ ಜಾರಿ ಮಾಡಿ, ಆ.ಪೊ.ಅ.ರವರು ನೀಡಿದ ಸಮಜಾಯಿಷಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 21.03.2009ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರುವಂತೆ 1 ವರ್ಷ ಕಾಲ ಮುಂದೂಡಿ, ಇವರು ಅಮಾನತ್ತಿನಲ್ಲಿದ್ದ ಅವಧಿಯನ್ನು ಅಮಾನತ್ತೆಂದು ಪರಿಗಣಿಸಲಾದ ದಂಡನೆಯನ್ನು ವಿಧಿಸಲಾಗಿದೆ.

ಶಿಸ್ತು ಪ್ರಾಧಿಕಾರದ ಆದೇಶದ ವಿರುದ್ಧ ಕಾಲವಿಳಂಬವಾಗಿ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 24.03.2013ರ ಹಿಂಬರಹದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆಯು ದೋಷಾರೋಪಣೆಗೆ ಅನುಗುಣವಾಗಿರುವುದರಿಂದ ಹಾಗೂ ನ್ಯಾಯದಾನದ ದೃಷ್ಟಿಯಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 173 ಪೊಸಿಅ 2013 ಬೆಂಗಳೂರು, ದಿನಾಂಕ: 06.06.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಎಂ. ಬೆಂಕಿ, ಪಿಎಸ್ಐ, ಜೇವರ್ಗಿ ಪೊಲೀಸ್ ಠಾಣೆ, ಗದಗ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವೇಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು-ಬಿ)

PR. 515

## ತೋಟಗಾರಿಕೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ತೋಇ 158 ರೇಕೃವಿ 2013, ಬೆಂಗಳೂರು, ದಿನಾಂಕ: 26-05-2014**

ಭಾರತೀಯ ಸಂವಿಧಾನ ಅನುಚ್ಛೇಧ 371(ಜೆ) ಯ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಹೊರಡಿಸಿರುವ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್-ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013 ರ ಕಂಡಿಕೆ-13 ರನ್ವಯ ತೋಟಗಾರಿಕಾ ಸಚಿವಾಲಯದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ನಿರ್ದೇಶನಾಲಯವು ರಾಜ್ಯಮಟ್ಟದ ಕಛೇರಿಯೆಂದು ಗುರುತಿಸಲಾಗಿದ್ದು, ಸದರಿ ಕಛೇರಿಯ ಸೇವೆಯಲ್ಲಿನ ಹುದ್ದೆಗಳಲ್ಲಿ ವೃಂದವಾರು ಅಂದರೆ, ಸಮೂಹ-ಎ (ಕಿರಿಯ ಶ್ರೇಣಿವರೆಗೆ), ಸಮೂಹ-ಬಿ, ಸಮೂಹ-ಸಿ ಮತ್ತು ಸಮೂಹ-ಡಿ ಹುದ್ದೆಗಳಿಗೆ ಹೈದರಾಬಾದ್-ಕರ್ನಾಟಕ ಪ್ರದೇಶ ವ್ಯಾಪ್ತಿಯ ಸ್ಥಳೀಯ ವ್ಯಕ್ತಿಗಳಿಗೆ ಶೇ.8 ರಷ್ಟು ಹುದ್ದೆಗಳನ್ನು ಮೀಸಲಿರಿಸಿ **ಅನುಬಂಧ-1** ರಲ್ಲಿರುವಂತೆ ಅಧಿಸೂಚಿಸಲಾಗಿದೆ.

ಮುಂದುವರೆದು, ಬೀದರ್, ಬಳ್ಳಾರಿ, ಗುಲ್ಬರ್ಗಾ, ಕೊಪ್ಪಳ, ರಾಯಚೂರು ಮತ್ತು ಯಾದಗಿರಿ ಜಿಲ್ಲೆಗಳ ವ್ಯಾಪ್ತಿಗೆ ಬರುವ ರೇಷ್ಮೆ ಇಲಾಖೆಯನ್ನು ಪ್ರಾದೇಶಿಕ ಮಟ್ಟದ ಕಛೇರಿಗಳೆಂದು ಗುರುತಿಸಿ, ಆ ಕಛೇರಿಗಳ ಸೇವೆಯಲ್ಲಿನ ಹುದ್ದೆಗಳಲ್ಲಿ ವೃಂದವಾರು ಅಂದರೆ, ಸಮೂಹ-ಎ (ಕಿರಿಯ ಶ್ರೇಣಿಯವರೆಗೆ), ಸಮೂಹ-ಬಿ ಹುದ್ದೆಗಳಿಗೆ ಶೇ. 75, ಸಮೂಹ-ಸಿ ಹುದ್ದೆಗಳಿಗೆ ಶೇ.80 ಹಾಗೂ ಸಮೂಹ-ಡಿ ಹುದ್ದೆಗಳಿಗೆ ಶೇ.85 ರಷ್ಟು ಹುದ್ದೆಗಳನ್ನು ಮೀಸಲಿರಿಸಿ, **ಅನುಬಂಧ-2** ರಲ್ಲಿರುವಂತೆ ಅಧಿಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಬಿ.ವಿಜಯಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ತೋಟಗಾರಿಕೆ ಇಲಾಖೆ (ರೇಷ್ಮೆ).

### ಅನುಬಂಧ – 1

**ರೇಷ್ಮೆ ಇಲಾಖೆ – ಹೈದ್ರಾಬಾದ್-ಕರ್ನಾಟಕ "ರಾಜ್ಯ ಮಟ್ಟದ ಸ್ಥಳೀಯ ವೃಂದ" ರಚನೆ**

| ಕ್ರ ಸಂ | ಹುದ್ದೆ | ವೇತನ ಶ್ರೇಣಿ (ರೂ.ಗಳಲ್ಲಿ) | ಮಂಜೂರಾದ ವೃಂದ ಬಲ | ರೇಷ್ಮೆ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಅನುಪಾತ ಶೇಕಡಾವಾರು | | ಸ್ಥಳೀಯ ವೃಂದದಲ್ಲಿ ಹೈ-ಕ ಪ್ರದೇಶದವರಿಗಾಗಿ ಗುರುತಿಸಲಾದ ಶೇ 8 ರಷ್ಟು ಹುದ್ದೆಗಳು | | |
|---|---|---|---|---|---|---|---|---|
| | | | | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | ಒಟ್ಟು |
| 1 | 2 | 2 | 3 | 4 | 5 | 6 | 7 | 8 |
| | 'ಎ' ವೃಂದ | | | | | | | |
| 1. | ಆಡಳಿತಾಧಿಕಾರಿ | 28100-50100 | 01 | – | 100% | | | |
| | | | | – | 01 | – | – | – |

